KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜೂನ್ ೫, ೨೦೦೮ (ಜೇಷ್ಠ ೧೫, ಶಕ ವರ್ಷ ೧೯೩೦) | ಸಂಚಿಕೆ ೨೩ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001.**

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–1/2008, ದಿನಾಂಕ: 02ನೇ ಜೂನ್ 2008**

1. ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ತಿದ್ದುಪಡಿ ನಿಯಮಗಳು 2007 ಮತ್ತು 2008 ರಡಿಯಲ್ಲಿ **ಸರ್ಕಾರದ ವಿವಿಧ ಇಲಾಖೆಗಳಲ್ಲಿ ಗ್ರೂಪ್ –' ಎ ', ' ಬಿ ' ಮತ್ತು ' ಸಿ ' ಗುಂಪಿನ ತಾಂತ್ರಿಕ ಹುದ್ದೆಗಳನ್ನು** ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ **ಆಯೋಗವು ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ** ಅರ್ಜಿಗಳನ್ನು ಆಹ್ವಾನಿಸಿದೆ:–

| ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|
| **ಗ್ರೂಪ್– ' ಎ ' ಹುದ್ದೆಗಳು** | |
| 1) ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಪ್ರಕೃತಿ ಚಿಕಿತ್ಸೆ ವೈದ್ಯರು ದರ್ಜೆ–1ರ ಹುದ್ದೆ | 01 |
| 2) ಕೃಷಿ ಇಲಾಖೆಯಲ್ಲಿ ಸಹಾಯಕ ಕೃಷಿ ನಿರ್ದೇಶಕರು | 25 |
| **ಗ್ರೂಪ್– ' ಬಿ ' ಹುದ್ದೆಗಳು** | |
| 3) ತಾಂತ್ರಿಕ ಶಿಕ್ಷಣ ಇಲಾಖೆಯ ಪಾಲಿಟೆಕ್ನಿಕ್/ಗಣಿ ಶಿಕ್ಷಣ ಶಾಲೆಗಳಲ್ಲಿ ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗಳು | 476 |
| 4) ಔಷಧ ನಿಯಂತ್ರಣ ಇಲಾಖೆಯಲ್ಲಿ ಔಷಧ ಪರಿವೀಕ್ಷಕರು | 26 |
| 5) ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಪಶು ವೈದ್ಯಾಧಿಕಾರಿಗಳು | 122+78(ಬ್ಯಾಲಾ) |
| 6) ನಗರಾಭಿವೃದ್ಧಿ ಇಲಾಖೆಯಲ್ಲಿ ನಗರ ಯೋಜಕರ ಹುದ್ದೆಗಳು | 25 |
| 7) ಔಷಧ ನಿಯಂತ್ರಣ ಇಲಾಖೆಯಲ್ಲಿ ಕಿರಿಯ ರಸಾಯನ ತಜ್ಞರು | 16 |
| **ಗ್ರೂಪ್– ' ಸಿ ' ಹುದ್ದೆಗಳು** | |
| 8) ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಗ್ರಂಥಪಾಲಕರು | 167 |
| 9) ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ದೈಹಿಕ ಶಿಕ್ಷಣ ಬೋಧಕರು | 191 |
| 10) ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಲ್ಲಿ ಜೂನಿಯರ್ ಇಂಜಿನಿಯರ್ (ಸಿವಿಲ್) ಹುದ್ದೆಗಳು | 08 |
| 11) ಕೃಷಿ ಮಾರಾಟ ಇಲಾಖೆಯಲ್ಲಿ ಮಾರುಕಟ್ಟೆ ಮೇಲ್ವಿಚಾರಕರ ಹುದ್ದೆಗಳು | 63 |
| 12) ಔಷಧ ನಿಯಂತ್ರಣ ಇಲಾಖೆಯಲ್ಲಿ ಪ್ರಯೋಗಶಾಲಾ ತಂತ್ರಜ್ಞರ (ಔಷಧ) ಹುದ್ದೆಗಳು | 03 |

| ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|
| 13) ನಗರ ಯೋಜನಾ ಇಲಾಖೆಯಲ್ಲಿ ಸಹಾಯಕ ನಗರ ಯೋಜಕರ ಹುದ್ದೆಗಳು | 50 |
| 14) ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಪಾಲಿಟೆಕ್ನಿಕ್‌ಗಳಲ್ಲಿ ವಿವಿಧ ವಿಷಯಗಳ ಶಿಕ್ಷಕರ ಮತ್ತು ಮೆಕ್ಯಾನಿಕ್ ಹುದ್ದೆಗಳು | 195 |
| 15) ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗಳು | 100 |
| 16) ಪೌರಾಡಳಿತ ನಿರ್ದೇಶನಾಲಯದಲ್ಲಿ ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–1ರ ಹುದ್ದೆಗಳು | 03 |
| 17) ಪೌರಾಡಳಿತ ನಿರ್ದೇಶನಾಲಯದಲ್ಲಿ ಡಾಟಾ ಎಂಟ್ರಿ ಆಪರೇಟರ್ ಗ್ರೇಡ್–2ರ ಹುದ್ದೆ | 01 |

**2**. ಸದರಿ ಹುದ್ದೆಗಳಿಗೆ ಆಯೋಗವು ನೇಮಕಾತಿಗಾಗಿ ನಿಗದಿಪಡಿಸಿರುವ ನಮೂನೆಯಲ್ಲಿಯೇ ಅರ್ಜಿಗಳನ್ನು ಸಲ್ಲಿಸಬೇಕು. ಇತರೆ ಯಾವುದೇ ನಮೂನೆಗಳಲ್ಲಿಯಾಗಲಿ ಅಥವಾ ಬೆರಳಚ್ಚು / ಫೋಟೋ ಪ್ರತಿ ಮಾಡಿರುವ, ಕೈ ಬರಹದಿಂದ ಸಲ್ಲಿಸಲ್ಪಡುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಟಿಪ್ಪಣಿ:** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 11–07–2008 ಆಗಿರುತ್ತದೆ.**

**3. ನಿಗದಿತ ಅರ್ಜಿ ನಮೂನೆಯ ಬೆಲೆ: ರೂ. 50/–**

**3.1** ಅಭ್ಯರ್ಥಿಗಳು ಅರ್ಜಿಗಳನ್ನು ರೂ: 50/– ನ್ನು ನಗದಾಗಿ ಪಾವತಿಸಿ ಈ ಕೆಳಗೆ ನಮೂದಿಸಿರುವ ಅಂಚೆ ಕಛೇರಿಗಳಲ್ಲಿ ಮತ್ತು ಆಯೋಗದ ಕೇಂದ್ರ / ಪ್ರಾಂತೀಯ ಕಛೇರಿಗಳಲ್ಲಿ **ದಿನಾಂಕ 11–06–2008** ರಿಂದ ಪಡೆಯಬಹುದು ಹಾಗೂ ಭರ್ತಿ ಮಾಡಿದ ಅರ್ಜಿಗಳನ್ನು ನಿಗದಿಪಡಿಸಿದ ಶುಲ್ಕದೊಂದಿಗೆ (ನಗದಾಗಿ) ಅರ್ಜಿಗಳನ್ನು ಪಡೆದ ಆಯೋಗದ ಕಛೇರಿ ಅಥವಾ ಅಂಚೆ ಕಛೇರಿಗಳಲ್ಲಿ ಸಲ್ಲಿಸತಕ್ಕದ್ದು.

<table>
<tr><th colspan="4">ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಸ್ಥಳಗಳ ವಿವರಗಳು</th></tr>
<tr><th colspan="4">ಆಯೋಗದ ಕಛೇರಿಗಳು</th></tr>
<tr><td colspan="2">ಕರ್ನಾಟಕ ಲೋಕ ಸೇವಾ ಆಯೋಗದ ಕೇಂದ್ರ ಕಛೇರಿ,<br>ಉದ್ಯೋಗ ಸೌಧ, ಬೆಂಗಳೂರು–560001</td><td colspan="2">ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿ,<br>ಜಿಲ್ಲಾ ಪಂಚಾಯತ್ ಕಛೇರಿ, ಹಳೆ ಕಟ್ಟಡ,<br>ಜಿಲ್ಲಾಧಿಕಾರಿಗಳ ಕಛೇರಿ ಆವರಣ, ಬೆಳಗಾವಿ –590002.</td></tr>
<tr><td colspan="2">ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿ,<br>ನಂ. 899, 3ನೇ ಮೈನ್, 8ನೇ ಅಡ್ಡ ರಸ್ತೆ, ಸರಸ್ವತಿಪುರಂ,<br>ಮೈಸೂರು–570009</td><td colspan="2">ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿ, ನಂ. 18, ಬಿ, 3ನೇ ಮಹಡಿ, ವಿಕಾಸಭವನ, ಮಿನಿ ವಿಧಾನಸೌಧ, ಗುಲ್ಬರ್ಗಾ–585102</td></tr>
<tr><th colspan="4">ಕೆಳಕಂಡ ಅಂಚೆ ಕಛೇರಿಗಳು</th></tr>
<tr><th>ಕ್ರಮ ಸಂಖ್ಯೆ</th><th>ಮುಖ್ಯ ಅಂಚೆ ಕಛೇರಿಯ ಹೆಸರು</th><th>ಕ್ರಮ ಸಂಖ್ಯೆ</th><th>ಮುಖ್ಯ ಅಂಚೆ ಕಛೇರಿಯ ಹೆಸರು</th></tr>
<tr><td>1</td><td>ಜನರಲ್ ಪೋಸ್ಟ್ ಆಫೀಸ್, ಬೆಂಗಳೂರು</td><td>2</td><td>ಮುಖ್ಯ ಅಂಚೆ ಕಛೇರಿ, ಹೆಚ್.ಎ.ಎಲ್.2ನೇ ಸ್ಟೇಜ್ ಬೆಂಗಳೂರು</td></tr>
<tr><td>3</td><td>ಮುಖ್ಯ ಅಂಚೆ ಕಛೇರಿ, ಆರ್.ಟಿ.ನಗರ ಬೆಂಗಳೂರು</td><td>4</td><td>ಮುಖ್ಯ ಅಂಚೆ ಕಛೇರಿ, ಜಯನಗರ, ಬೆಂಗಳೂರು</td></tr>
<tr><td>5</td><td>ಮುಖ್ಯ ಅಂಚೆ ಕಛೇರಿ, ಬಸವನಗುಡಿ, ಬೆಂಗಳೂರು</td><td>6</td><td>ಮುಖ್ಯ ಅಂಚೆ ಕಛೇರಿ, ರಾಜಾಜಿನಗರ, ಬೆಂಗಳೂರು</td></tr>
<tr><td>7</td><td>ಮುಖ್ಯ ಅಂಚೆ ಕಛೇರಿ, ಜಾಲಹಳ್ಳಿ, ಬೆಂಗಳೂರು</td><td>8</td><td>ಮುಖ್ಯ ಅಂಚೆ ಕಛೇರಿ, ಚನ್ನಪಟ್ಟಣ</td></tr>
<tr><td>9</td><td>ಮುಖ್ಯ ಅಂಚೆ ಕಛೇರಿ, ಬಾಗಲಕೋಟೆ</td><td>10</td><td>ಮುಖ್ಯ ಅಂಚೆ ಕಛೇರಿ, ಜಮಖಂಡಿ</td></tr>
<tr><td>11</td><td>ಮುಖ್ಯ ಅಂಚೆ ಕಛೇರಿ, ಬೆಳಗಾವಿ</td><td>12</td><td>ಮುಖ್ಯ ಅಂಚೆ ಕಛೇರಿ, ಬೈಲಹೊಂಗಲ</td></tr>
<tr><td>13</td><td>ಮುಖ್ಯ ಅಂಚೆ ಕಛೇರಿ, ರಾಮದುರ್ಗ</td><td>14</td><td>ಮುಖ್ಯ ಅಂಚೆ ಕಛೇರಿ, ಹೊಸಪೇಟೆ</td></tr>
<tr><td>15</td><td>ಮುಖ್ಯ ಅಂಚೆ ಕಛೇರಿ, ಬಳ್ಳಾರಿ</td><td>16</td><td>ಮುಖ್ಯ ಅಂಚೆ ಕಛೇರಿ, ಬೀದರ್</td></tr>
<tr><td>17</td><td>ಮುಖ್ಯ ಅಂಚೆ ಕಛೇರಿ, ಬಿಜಾಪುರ</td><td>18</td><td>ಮುಖ್ಯ ಅಂಚೆ ಕಛೇರಿ, ಇಂಡಿ</td></tr>
<tr><td>19</td><td>ಮುಖ್ಯ ಅಂಚೆ ಕಛೇರಿ, ಅಥಣಿ</td><td>20</td><td>ಮುಖ್ಯ ಅಂಚೆ ಕಛೇರಿ, ಚಿಕ್ಕೋಡಿ</td></tr>
<tr><td>21</td><td>ಮುಖ್ಯ ಅಂಚೆ ಕಛೇರಿ, ಧಾರವಾಡ</td><td>22</td><td>ಮುಖ್ಯ ಅಂಚೆ ಕಛೇರಿ, ಹುಬ್ಬಳ್ಳಿ</td></tr>
<tr><td>23</td><td>ಮುಖ್ಯ ಅಂಚೆ ಕಛೇರಿ, ಗದಗ</td><td>24</td><td>ಮುಖ್ಯ ಅಂಚೆ ಕಛೇರಿ, ಕೊಪ್ಪಳ</td></tr>
<tr><td>25</td><td>ಮುಖ್ಯ ಅಂಚೆ ಕಛೇರಿ, ಗೋಕಾಕ್</td><td>26</td><td>ಮುಖ್ಯ ಅಂಚೆ ಕಛೇರಿ, ಯಾದಗಿರಿ</td></tr>
<tr><td>27</td><td>ಮುಖ್ಯ ಅಂಚೆ ಕಛೇರಿ, ಗುಲ್ಬರ್ಗ</td><td>28</td><td>ಮುಖ್ಯ ಅಂಚೆ ಕಛೇರಿ, ಹಾವೇರಿ</td></tr>
</table>

| ಕ್ರಮ ಸಂಖ್ಯೆ | ಮುಖ್ಯ ಅಂಚೆ ಕಛೇರಿಯ ಹೆಸರು | ಕ್ರಮ ಸಂಖ್ಯೆ | ಮುಖ್ಯ ಅಂಚೆ ಕಛೇರಿಯ ಹೆಸರು |
|---|---|---|---|
| 29 | ಮುಖ್ಯ ಅಂಚೆ ಕಛೇರಿ, ಕಾರವಾರ | 30 | ಮುಖ್ಯ ಅಂಚೆ ಕಛೇರಿ, ಕುಮುಟಾ |
| 31 | ಮುಖ್ಯ ಅಂಚೆ ಕಛೇರಿ, ರಾಯಚೂರು | 32 | ಮುಖ್ಯ ಅಂಚೆ ಕಛೇರಿ, ಸಿರಸಿ |
| 33 | ಮುಖ್ಯ ಅಂಚೆ ಕಛೇರಿ, ಚಿಕ್ಕಮಗಳೂರು | 34 | ಮುಖ್ಯ ಅಂಚೆ ಕಛೇರಿ, ಕೊಪ್ಪ |
| 35 | ಮುಖ್ಯ ಅಂಚೆ ಕಛೇರಿ, ದಾವಣಗೆರೆ | 36 | ಮುಖ್ಯ ಅಂಚೆ ಕಛೇರಿ, ಚಿತ್ರದುರ್ಗ |
| 37 | ಮುಖ್ಯ ಅಂಚೆ ಕಛೇರಿ, ಭದ್ರಾವತಿ | 38 | ಮುಖ್ಯ ಅಂಚೆ ಕಛೇರಿ, ಹಾಸನ |
| 39 | ಮುಖ್ಯ ಅಂಚೆ ಕಛೇರಿ, ಅರಸೀಕೆರೆ | 40 | ಮುಖ್ಯ ಅಂಚೆ ಕಛೇರಿ, ಮಡಿಕೇರಿ |
| 41 | ಮುಖ್ಯ ಅಂಚೆ ಕಛೇರಿ, ಕೋಲಾರ | 42 | ಮುಖ್ಯ ಅಂಚೆ ಕಛೇರಿ, ಚಿಕ್ಕಬಳ್ಳಾಪುರ |
| 43 | ಮುಖ್ಯ ಅಂಚೆ ಕಛೇರಿ, ಮಂಡ್ಯ | 44 | ಮುಖ್ಯ ಅಂಚೆ ಕಛೇರಿ, ಶ್ರೀರಂಗಪಟ್ಟಣ |
| 45 | ಮುಖ್ಯ ಅಂಚೆ ಕಛೇರಿ, ಮಂಗಳೂರು | 46 | ಮುಖ್ಯ ಅಂಚೆ ಕಛೇರಿ, ಕುಲಶೇಖರ್ |
| 47 | ಮುಖ್ಯ ಅಂಚೆ ಕಛೇರಿ, ಮೈಸೂರು | 48 | ಮುಖ್ಯ ಅಂಚೆ ಕಛೇರಿ, ಸರಸ್ವತಿಪುರಂ, ಮೈಸೂರು |
| 49 | ಮುಖ್ಯ ಅಂಚೆ ಕಛೇರಿ, ಕೊಳ್ಳೇಗಾಲ | 50 | ಮುಖ್ಯ ಅಂಚೆ ಕಛೇರಿ, ನಂಜನಗೂಡು |
| 51 | ಮುಖ್ಯ ಅಂಚೆ ಕಛೇರಿ, ಕಾರ್ಕಳ | 52 | ಮುಖ್ಯ ಅಂಚೆ ಕಛೇರಿ, ಪುತ್ತೂರು |
| 53 | ಮುಖ್ಯ ಅಂಚೆ ಕಛೇರಿ, ಶಿವಮೊಗ್ಗ | 54 | ಮುಖ್ಯ ಅಂಚೆ ಕಛೇರಿ, ಸಾಗರ |
| 55 | ಮುಖ್ಯ ಅಂಚೆ ಕಛೇರಿ, ತಿಪಟೂರು | 56 | ಮುಖ್ಯ ಅಂಚೆ ಕಛೇರಿ, ತುಮಕೂರು |
| 57 | ಮುಖ್ಯ ಅಂಚೆ ಕಛೇರಿ, ಉಡುಪಿ | 58 | ಮುಖ್ಯ ಅಂಚೆ ಕಛೇರಿ, ಕುಂದಾಪುರ |
| 59 | ಮುಖ್ಯ ಅಂಚೆ ಕಛೇರಿ, ಮಣಿಪಾಲ್ | | |

**ಅಂಚೆ ಮೂಲಕ ಅರ್ಜಿಗಳನ್ನು ಪಡೆಯಲು ಮತ್ತು ಸ್ವೀಕರಿಸಲು ಅವಕಾಶವಿರುವುದಿಲ್ಲ. ಅರ್ಜಿಗಳನ್ನು ಸೂಚಿಸಿರುವ ಅಂಚೆ ಕಛೇರಿಗಳಲ್ಲಿ / ಆಯೋಗದ ಕಛೇರಿಗಳಲ್ಲಿ ಮಾತ್ರ ಖುದ್ದಾಗಿ ಪಡೆದು ಖುದ್ದಾಗಿಯೇ ಸಲ್ಲಿಸತಕ್ಕದ್ದು.**

**4. ಶುಲ್ಕ, ಶುಲ್ಕ ಪಾವತಿ ಮಾಡುವ ರೀತಿ ಹಾಗೂ ಭರ್ತಿ ಮಾಡಿದ ಅರ್ಜಿ ಸಲ್ಲಿಸಬೇಕಾದ ಸ್ಥಳದ ವಿವರ**

**4.1** ಸಾಮಾನ್ಯ ಅರ್ಹತೆ/ಪ್ರವರ್ಗ 2(ಎ), ಪ್ರವರ್ಗ–2(ಬಿ), ಪ್ರವರ್ಗ–3(ಎ), ಪ್ರವರ್ಗ–3(ಬಿ) ನ ಅಭ್ಯರ್ಥಿಗಳಿಗೆ ರೂ.300/–

4.2 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 / ಮಾಜಿ ಸೈನಿಕ ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ ಶುಲ್ಕದಿಂದ ವಿನಾಯಿತಿ ಇದೆ. ಆದಾಗ್ಯೂ ಈ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಸಂದರ್ಶನದಲ್ಲಿ ಪಡೆದ ಅಂಕಗಳ ವಿವರದ ಪೂರೈಕೆಗಾಗಿ ಶುಲ್ಕ ರೂ. 100/–ನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

4.3 ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಇದೇ ಅಧಿಸೂಚನೆಯ ಕಂಡಿಕೆ 4ರಲ್ಲಿ ಸೂಚಿಸಿರುವ ಆಯೋಗದ ಕಛೇರಿಗಳಲ್ಲಿ / ಅಂಚೆ ಕಛೇರಿಗಳಲ್ಲಿ ಮೇಲೆ ತಿಳಿಸಿರುವ ಶುಲ್ಕವನ್ನು ನಗದು ಮೂಲಕ ಪಾವತಿಸಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು.

4.4 ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

4.5 ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿಯನ್ನು ಶುಲ್ಕದೊಂದಿಗೆ ಸಲ್ಲಿಸತಕ್ಕದ್ದು.

4.6 ಯಾವುದೇ ಅಭ್ಯರ್ಥಿಗಳು ಮೇಲೆ ತಿಳಿಸಿರುವ ಶುಲ್ಕವನ್ನು ಪಾವತಿಸದಿದ್ದಲ್ಲಿ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**5. ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**6 (1) ನೇಮಕಾತಿ ವಿಧಾನ:– (ಸಂದರ್ಶನ ಮೂಲಕ ಆಯ್ಕೆ)**

(1) ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಪ್ರಥಮ ತಿದ್ದುಪಡಿ 2007ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಆಯೋಗದಿಂದ ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ ಅಥವಾ ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ.

ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

(2) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್‌ಸಿಆರ್ 2006(ಪಿ) ದಿನಾಂಕ 17–04–2008ರಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ (ಎರಡನೇ ತಿದ್ದುಪಡಿಯ) ನಿಯಮ 2008 ರಲ್ಲಿ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

" ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ ".

(3) ಉಪ ಕಂಡಿಕೆ (2) ರಲ್ಲಿ ತಿಳಿಸಿರುವ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಅರ್ಜಿಯ ಕ್ರಮ ಸಂಖ್ಯೆ 10(ಎ) ರಲ್ಲಿ ಸೂಕ್ತ ವೃತ್ತವನ್ನು ಶೇಡ್ ಮಾಡಿ ಹಾಗೂ ಲೋಕ ಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ, ಅರ್ಜಿಯ ಕ್ರಮಸಂಖ್ಯೆ 10(ಬಿ) ರಲ್ಲಿ ಪರೀಕ್ಷೆ ನಡೆದ ದಿನಾಂಕ ಮತ್ತು ನೋಂದಣಿ ಸಂಖ್ಯೆಯನ್ನು ತಪ್ಪದೇ ನಮೂದಿಸತಕ್ಕದ್ದು ಹಾಗೂ ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

(4) ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿದ್ದು, ಅಭ್ಯರ್ಥಿಗಳು ಅಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡವಾರು ಅಂಕಗಳ ಮತ್ತು ಆಯೋಗವು ನಡೆಸುವ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಠ ಅಂಕಗಳು 15 (ಹದಿನೈದು)

**<u>ಸೂಚನೆ</u>:– ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಈ ಮಾಹಿತಿ ಪುಸ್ತಕದ ಕೊನೆಯ ಪುಟದಲ್ಲಿ ನೀಡಲಾಗಿದೆ ಹಾಗೂ ಆಯೋಗದ ವೆಬ್ ಸೈಟ್ <u>" http://kpsc.kar.nic.in/ Syllabus"</u> ನಲ್ಲಿಯೂ ಬಿತ್ತರಿಸಲಾಗಿದೆ.**

**7. <u>ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–</u>**

**7.1 <u>ಶೈಕ್ಷಣಿಕ ವಿದ್ಯಾರ್ಹತೆ</u>:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಯ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

**7.2 <u>ವಯೋಮಿತಿ:–</u>** ಅನುಸೂಚಿಯಲ್ಲಿ ಆಯಾ ಹುದ್ದೆಯ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

**(ಈ)** ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಿಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಿಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

**(ಊ)** ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) **ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.**

(ೠ) **ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.**

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕ ನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶ'ದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**9. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಡಿ ' ರಲ್ಲಿ

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಇ ' ರಲ್ಲಿ

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ನಮೂನೆ ' ಎಫ್ ' ರಲ್ಲಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಪ್ರವರ್ಗ–2ಎ, 2ಬಿ 3ಎ, 3ಬಿ ಮೀಸಲಾತಿಗಳಿಗೆ ನಮೂನೆ–'ಎಫ್' ರಲ್ಲಿ ಪಡೆದ ಜಾತಿ ಪ್ರಮಾಣ ಪತ್ರಗಳು ಜಾರಿಯಾದ ದಿನಾಂಕದಿಂದ 5 ವರ್ಷಗಳವರೆಗೆ ಚಾಲ್ತಿಯಲ್ಲಿರುತ್ತವೆ. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. **(ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು) (ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದು)**

**10. ಗ್ರಾಮೀಣ ಅಭ್ಯರ್ಥಿ**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೆನಿ 2001 ದಿನಾಂಕ 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿದ್ದಲ್ಲಿ ಈ ಮೀಸಲಾತಿಯನ್ನು ಪಡೆಯಲು ಅರ್ಹರಾಗುತ್ತಾರೆ. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 97 ಸೇನೆನಿ 2005 ದಿನಾಂಕ 10–08–2005ರ ಮೇರೆಗೆ ಗ್ರಾಮೀಣ ಮೀಸಲಾತಿ ಕೋರುವವರು ಸಲ್ಲಿಸಬೇಕಾದ ನಮೂನೆ–2ನ್ನು ಸರ್ಕಾರವು ಪರಿಷ್ಕರಿಸಿದ್ದು, ಅದನ್ನು ಈ ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವ'ನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. **(ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು).**

**11. ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ತಪ್ಪಿದಲ್ಲಿ ಅಂತಹ

ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. **(ಈ ಪ್ರಮಾಣ ಪತ್ರದ ನಮೂನೆಯನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಕಮಾಅ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು)**

**12. ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ–' ಎ ' ಮತ್ತು ' ಬಿ ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 104 ಎಸ್‌ಆರ್‌ಆರ್ 2005 ದಿನಾಂಕ 13–09–2005ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ ' ಸಿ ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೇನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. **(ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು).**

**13. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ (ಗ್ರೂಪ್ ' ಸಿ ' ಹುದ್ದೆಗಳಿಗೆ ಮಾತ್ರ)**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 23 ಸೇನೇನಿ 99 ದಿನಾಂಕ 23–11–2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಈ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು)

**14 ದೇಹ ದಾರ್ಢ್ಯತೆ**

ನೇಮಕಾತಿ ನಿಯಮಗಳಲ್ಲಿ ಯಾವುದೇ ಹುದ್ದೆಗೆ ದೇಹದಾರ್ಢ್ಯತೆ ನಿಗದಿಪಡಿಸಿದ್ದ್‌ಲ್ಲಿ ಅಂತಹ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿಯಮಾನುಸಾರ ನಿಗದಿಪಡಿಸಿದ ದೇಹದಾರ್ಢ್ಯತೆಯನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಹೊಂದಿರಬೇಕು ಮತ್ತು ದೇಹದಾರ್ಢ್ಯತೆಯ ಪ್ರಮಾಣ ಪತ್ರವನ್ನು ಸಹಾಯಕ ಶಸ್ತ್ರಚಿಕಿತ್ಸಕ ಹುದ್ದೆಯ ಶ್ರೇಣಿಗಿಂತ ಕಡಿಮೆಯಿಲ್ಲದ ವೈದ್ಯಾಧಿಕಾರಿಯಿಂದ ಪಡೆದಿಟ್ಟುಕೊಂಡಿರತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳನ್ನು ತಿರಸ್ಕರಿಸಲಾಗುವುದು.

**15. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಬೆಂಗಳೂರು / ಮೈಸೂರು / ಧಾರವಾಡ / ಗುಲ್ಬರ್ಗಾ ವಿಭಾಗೀಯ ಕೇಂದ್ರದಲ್ಲಿ ಹಾಗೂ ಆಯೋಗವು ನಿಗದಿಪಡಿಸಿರುವ ಇತರೆ ಯಾವುದೇ ಕೇಂದ್ರ ಸ್ಥಳದಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ವಿಭಾಗೀಯ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಸಂದರ್ಶನ / ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತುಪಡಿಸಲಾಗುವುದು ಹಾಗೂ ಆಯೋಗದ ವೆಬ್ ಸೈಟ್ " http://kpsc.kar.nic in/notification" ನಲ್ಲಿಯೂ ಬಿತ್ತರಿಸಲಾಗುವುದು.**

**16. ಆಯೋಗದೊಡನೆ ಪತ್ರ ವ್ಯವಹಾರ:**

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರನ್ನು ನಡೆಸುವುದಿಲ್ಲ. ಆದಾಗ್ಯೂ ಅಭ್ಯರ್ಥಿಗೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ಪ್ರವೇಶ ಪತ್ರ / ಸಂದರ್ಶನಕ್ಕೆ ಸೂಚನೆ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕಛೇರಿಯನ್ನು ಖುದ್ದಾಗಿ ಸಂಪರ್ಕಿಸತಕ್ಕದ್ದು. ಸದರಿ ಪರೀಕ್ಷೆಗೆ ಅಭ್ಯರ್ಥಿಗಳು ಪ್ರವೇಶ ಪತ್ರ ಬಾರದಿದ್ದಲ್ಲಿ ಆಯೋಗದ ಅಂತರ್ಜಾಲದಿಂದ ಡೌನ್‌ಲೋಡ್ ಮಾಡಿಕೊಳ್ಳತಕ್ಕದ್ದು. ಸಂದರ್ಶನಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಸಂದರ್ಶನ ಪತ್ರದ ನಕಲನ್ನು ನೀಡಲಾಗುವುದು.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು:–

**(i)** ಹುದ್ದೆಯ / ವಿಷಯದ ಹೆಸರು

**(ii)** ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

**(iii)** ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

17. **ಪ್ರಾಮುಖ್ಯವಾದ ಸೂಚನೆಗಳು:–**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದು ಫೋಟೋ ಪ್ರತಿಯನ್ನು ಭರ್ತಿ ಮಾಡಿದ ಅರ್ಜಿಯೊಂದಿಗೆ **ಲಗತ್ತಿಸಬೇಕು**. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿಯೊಂದಿಗೆ ಸ್ವಯಂ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ಲಗತ್ತಿಸಿದ ಬಗ್ಗೆ ಅರ್ಜಿಯೊಂದಿಗೆ ನೀಡಿರುವ ಅಭ್ಯರ್ಥಿಗಳ ಸೂಚನೆಗಳಲ್ಲಿ ನೀಡಿರುವ ಚೆಕ್‌ಲಿಸ್ಟ್‌ನಲ್ಲಿ ನೀಡಿರುವ ಕ್ರಮ ಸಂಖ್ಯೆಗಳ ಪಕ್ಕದಲ್ಲಿರುವ ಬಾಕ್ಸ್‌ನಲ್ಲಿ **"ಲಗತ್ತಿಸಿದೆ"** ಎಂಬುದಾಗಿಯೂ ಹಾಗೂ ಕೇಳಿರುವ ಯಾವುದೇ ಪ್ರಮಾಣ ಪತ್ರವನ್ನು ಲಗತ್ತಿಸದೇ ಇದ್ದಲ್ಲಿ **"ಲಗತ್ತಿಸಿಲ್ಲ"** ಎಂಬುದಾಗಿ ಸ್ಪಷ್ಟವಾಗಿ ಬರೆಯತಕ್ಕದ್ದು ಹಾಗೂ ಪ್ರಮಾಣ ಪತ್ರಗಳಿಗೆ ಪುಟ ಸಂಖ್ಯೆಗಳನ್ನು ನೀಡಿ ಚೆಕ್‌ಲಿಸ್ಟ್‌ನಲ್ಲಿ ನಮೂದಿಸಿ ಒಟ್ಟು ಪುಟ ಸಂಖ್ಯೆಗಳನ್ನು ಸ್ವೀಕೃತಿ ಪ್ರತಿಯಲ್ಲಿ ನಮೂದಿಸಬೇಕು.

1) ಹುದ್ದೆಗೆ ನಿಗದಿಪಡಿಸಿದ ಶುಲ್ಕ (ಅರ್ಜಿಯನ್ನು ಸಲ್ಲಿಸುವಾಗ ಪಾವತಿಸತಕ್ಕದ್ದು)
2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ / ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು /ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ
3) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
4) ಹುದ್ದೆಗೆ ಅನುಭವ / ತರಬೇತಿ ನಿಗದಿಪಡಿಸಿದ್ದಲ್ಲಿ ಅದರ ಪ್ರಮಾಣ ಪತ್ರಗಳು
5) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
6) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
7) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
7) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
10) ದೇಹ ದಾರ್ಢ್ಯತೆಯ ಪ್ರಮಾಣ ಪತ್ರ (ನಿಗದಿಪಡಿಸಿದಲ್ಲಿ)

(ಮೇಲಿನ ಕ್ರಮ ಸಂಖ್ಯೆ 6, 7, 8, 9 ಮತ್ತು 10 ರ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಪುಸ್ತಕದಲ್ಲಿ ತೋರಿಸಲಾಗಿದೆ. ನಿಗದಿಪಡಿಸಿದ ನಮೂನೆಗಳಲ್ಲಿ ಮೀಸಲಾತಿಯನ್ನು ಕೋರದೇ ಇತರೆ ನಮೂನೆಗಳಲ್ಲಿ ಕೋರಿದ್ದಲ್ಲಿ ಮೀಸಲಾತಿಯನ್ನು ತಿರಸ್ಕರಿಸಲಾಗುವುದು).

**ಸಹಿ ಹಾಕದ ಮತ್ತು ಭಾವಚಿತ್ರವನ್ನು ಅಂಟಿಸದ ಅರ್ಜಿಯು ತಿರಸ್ಕೃತಗೊಳ್ಳುವುದು. ಅರ್ಜಿಯೊಂದಿಗೆ ಅಂಟಿಸುವ ಭಾವಚಿತ್ರವನ್ನು ಮಡಿಸುವುದನ್ನಾಗಲಿ ಅಥವಾ ಅದಕ್ಕೆ ಪಿನ್ ಅಥವಾ ಸ್ಟ್ಯಾಪ್ಲರ್ ಮಾಡಬಾರದು.**

18. **ವಿಶೇಷ ಸೂಚನೆಗಳು:–**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

(2) ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅರ್ಜಿಗಳನ್ನು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು. ಆನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

19. **ದುರ್ನಡತೆ:–** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ/ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಸಂದರ್ಶನದಿಂದ / ಅಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಹೆಚ್.ಬಿ. ಚನ್ನರಾಜು**
ಕಾರ್ಯದರ್ಶಿ, (ಪ್ರಭಾರ)
ಕರ್ನಾಟಕ ಲೋಕ ಸೇವಾ ಆಯೋಗ.

## ಅನುಸೂಚಿ

**ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–1/2008 ದಿನಾಂಕ: 02–06–2008**

**ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 11–07–2008**

<table>
<tr><th>ಹುದ್ದೆಗಳ ಅನುಕ್ರಮ ಸಂಖ್ಯೆ</th><th>ಹುದ್ದೆಯ ಸಂಕೇತ</th><th>ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ</th><th>ವೇತನ ಶ್ರೇಣಿ</th><th>ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ</th><th>ವಯೋಮಿತಿ (ವಯಸ್ಸು ವರ್ಷಗಳಲ್ಲಿ)</th><th>ಹುದ್ದೆಗಳ ವರ್ಗೀಕರಣ</th></tr>
<tr><td>(1)</td><td>(2)</td><td>(3)</td><td>(4)</td><td>(5)</td><td>(6)</td><td>(7)</td></tr>
<tr><td colspan="7">ಗ್ರೂಪ್ – ' ಎ ' ಹುದ್ದೆಗಳು</td></tr>
<tr><td>00–01</td><td>01</td><td>ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವೈದ್ಯರು ದರ್ಜೆ–1ರ (ಪ್ರಕೃತಿ ಚಿಕಿತ್ಸೆ ಮತ್ತು ಯೋಗ) 01 ಹುದ್ದೆ</td><td>ರೂ: 14050 –25050</td><td>(1) Must be holder of a Diploma in Naturopathy from the Government Nature Cure College, Hyderabad or equivalent qualification of four years duration recognised by Government or must be holder of one year diploma in Yoga awarded after BSAM by board of studies in Indian Medicine of Karnataka of two years Diploma in Nature Cure and Yoga awarded after BAMS/BSAM by the Board of studies in Indian Medicine Karnataka.<br>(2) Must have not less than ten years experience in Nature Cure or Yoga Institution,recognised by Government.<br>(3) Preference be given to those who are able to read and write Kannada.</td><td>ಕನಿಷ್ಠ – 18<br>ಗರಿಷ್ಠ – 45<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 48<br>ಪ.ಜಾ, ಪ.ಪಂ, ಪ್ರ 1 } 50</td><td>ಸಾಮಾನ್ಯ ಅರ್ಹತೆ(ಇತರೆ) – 01 ಹುದ್ದೆ</td></tr>
<tr><td>02–26</td><td>02</td><td>ಕೃಷಿ ಇಲಾಖೆಯಲ್ಲಿ ಸಹಾಯಕ ಕೃಷಿ ನಿರ್ದೇಶಕರ 25 ಹುದ್ದೆಗಳು</td><td>ರೂ : 14050 –25050 (ಕಿರಿಯ ವೇತನ ಶ್ರೇಣಿ)</td><td>(1)Must be holder of B.Sc.(Agri.) degree awarded by a University established by law in India.<br>(2) Must be a holder of Master degree in Agricultural Science.<br>(3) The selection shall be based on the marks secured in the highest of the qualifications prescribed by i.e. Master Degree in Agricultural Sciences.<br>(i) A weightage of one percent for each completed year of service shall be added to the average percentage of marks secured in the Master Degree examination in Agricultural Sciences in the case of candidates who have served in the University of Agricultural Sciences or the dept. of Agriculture;<br>(ii) A weightage of two percent shall be added to the percentage of marks secured in the qualifying examination in respect of the candidates who possess Ph.D in Agricultural Sciences. Provided that the total weightage under items (i) and (ii) above shall not exceed five percent.</td><td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸ್ಸೆ</th><th>ಒಟ್ಟು</th></tr>
<tr><td>ಪ.ಜಾ.</td><td>02</td><td>01</td><td>01</td><td>–</td><td>04</td></tr>
<tr><td>ಪ.ಪಂ.</td><td>–</td><td>–</td><td>01</td><td>–</td><td>01</td></tr>
<tr><td>ಪ್ರ 1</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td>01</td><td>02</td><td>–</td><td>04</td></tr>
<tr><td>ಪ್ರ.2(ಬಿ)</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>–</td><td>01</td><td>–</td><td>–</td><td>01</td></tr>
<tr><td>ಸಾ.ಅ.</td><td>05</td><td>03</td><td>03</td><td>01</td><td>12</td></tr>
<tr><td>ಒಟ್ಟು</td><td>11</td><td>06</td><td>07</td><td>01</td><td>25</td></tr>
</table>
</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td colspan="7">ಗ್ರೂಪ್ – ‘ ಬಿ ’ ಹುದ್ದೆಗಳು</td></tr>
<tr><td>27–104</td><td>03</td><td>ಸಿವಿಲ್ ಇಂಜಿನಿಯರಿಂಗ್ ಉಪನ್ಯಾಸಕರು – 78 ಹುದ್ದೆಗಳು</td><td>ರೂ: 8,000 – 13500 (AICTE PAY SCALE)</td><td>Must be holder of a first class degree in Civil Engineering.</td><td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ<br>ಪ್ರ 2ಬಿ<br>ಪ್ರ 3ಎ } 36<br>ಪ್ರ 3ಬಿ<br>ಪ.ಜಾ<br>ಪ.ಪಂ } 38<br>ಪ್ರ 1</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>04</td><td>04</td><td>02</td><td>01</td><td>01</td><td>–</td><td>12</td></tr>
<tr><td>ಪ.ಪಂ.</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.1</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.2(ಎ)</td><td>04</td><td>03</td><td>02</td><td>01</td><td>01</td><td>–</td><td>11</td></tr>
<tr><td>ಪ್ರ.2(ಬಿ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.3(ಎ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.3(ಬಿ)</td><td>01</td><td>01</td><td>01</td><td>–</td><td>–</td><td>01*</td><td>04</td></tr>
<tr><td>ಸಾ.ಅ.</td><td>11</td><td>11</td><td>10</td><td>04</td><td>02</td><td>01**</td><td>39</td></tr>
<tr><td>ಒಟ್ಟು</td><td>20</td><td>23</td><td>19</td><td>06</td><td>04</td><td>06</td><td>78</td></tr>
</table>
</td></tr>
<tr><td>105–184</td><td>04</td><td>ಮೆಕ್ಯಾನಿಕಲ್ ಇಂಜಿನಿಯರಿಂಗ್ ಉಪನ್ಯಾಸಕರು – 79+01 ಬ್ಯಾಕ್‌ಲಾಗ್ ಹುದ್ದೆಗಳು</td><td>– ಅದೇ –</td><td>Must be holder of a first class Bachelor’s degree in Mechanical Engineering.</td><td>– ಮೇಲಿನಂತೆ –</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>04</td><td>04</td><td>03</td><td>01</td><td>01<br>(ಬ್ಯಾ.ಲಾ)</td><td>–</td><td>12+01</td></tr>
<tr><td>ಪ.ಪಂ.</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಮೆಕ್ಯ</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.2(ಎ)</td><td>04</td><td>04</td><td>03</td><td>01</td><td>01</td><td>–</td><td>13</td></tr>
<tr><td>ಪ್ರ.2(ಬಿ)</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.3(ಎ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.3(ಬಿ)</td><td>01</td><td>02</td><td>01</td><td>–</td><td>–</td><td>–</td><td>04</td></tr>
<tr><td>ಸಾ.ಅ.</td><td>11</td><td>11</td><td>10</td><td>04</td><td>02</td><td>01***</td><td>39</td></tr>
<tr><td>ಒಟ್ಟು</td><td>22</td><td>25</td><td>20</td><td>06</td><td>03+01</td><td>03</td><td>79+01</td></tr>
</table>
</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>185–229</td>
<td>05</td>
<td>ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ಉಪನ್ಯಾಸಕರು – 43+02 (ಬ್ಯಾಕ್‌ಲಾಗ್) ಹುದ್ದೆಗಳು</td>
<td>ರೂ: 8,000 – 13500 (AICTE PAY SCALE)</td>
<td>Must be holder of a first class Bachelor's degree in Electrical and Electronics Engineering.</td>
<td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸ್ಶೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>02</td><td>02</td><td>02+01 (ಬ್ಯಾ.ಲಾ)</td><td>–</td><td>01</td><td>–</td><td>07+01</td></tr>
<tr><td>ಪ.ಪಂ.</td><td>–</td><td>–</td><td>01 (ಬ್ಯಾ.ಲಾ)</td><td>–</td><td>–</td><td>01*</td><td>01+01</td></tr>
<tr><td>ಪ್ರ.1</td><td>–</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td>02</td><td>02</td><td>–</td><td>01</td><td>–</td><td>06</td></tr>
<tr><td>ಪ್ರ.2(ಬಿ)</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಪ್ರ.3(ಎ)</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಪ್ರ.3(ಬಿ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಸಾ.ಅ.</td><td>06</td><td>06</td><td>05</td><td>02</td><td>01</td><td>01**</td><td>21</td></tr>
<tr><td>ಒಟ್ಟು</td><td>09</td><td>14</td><td>10+02</td><td>02</td><td>03</td><td>05</td><td>43+02</td></tr>
</table>
</td>
</tr>
<tr>
<td>230–302</td>
<td>06</td>
<td>ಟೆಲಿಕಮ್ಯೂನಿಕೇಷನ್ ಇಂಜಿನಿಯರಿಂಗ್ ಉಪನ್ಯಾಸಕರು 72+01 (ಬ್ಯಾಕ್‌ಲಾಗ್) ಹುದ್ದೆಗಳು</td>
<td>– ಅದೇ –</td>
<td>Must be holder of a first class Bachelor's degree in Electronics & Communication Engineering.</td>
<td>– ಮೇಲಿನಂತೆ –</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸ್ಶೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>04+01 (ಬ್ಯಾ.ಲಾ)</td><td>03</td><td>02</td><td>01</td><td>–</td><td>–</td><td>10+01</td></tr>
<tr><td>ಪ.ಪಂ.</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.1</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.2(ಎ)</td><td>04</td><td>04</td><td>02</td><td>01</td><td>–</td><td>–</td><td>11</td></tr>
<tr><td>ಪ್ರ.2(ಬಿ)</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.3(ಎ)</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.3(ಬಿ)</td><td>01</td><td>01</td><td>02</td><td>–</td><td>–</td><td>–</td><td>04</td></tr>
<tr><td>ಸಾ.ಅ.</td><td>10</td><td>10</td><td>09</td><td>04</td><td>02</td><td>01***</td><td>36</td></tr>
<tr><td>ಒಟ್ಟು</td><td>22+01</td><td>22</td><td>19</td><td>06</td><td>02</td><td>01</td><td>72+01</td></tr>
</table>
</td>
</tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>303–314</td>
<td>07</td>
<td>ಆಟೋಮೊಬೈಲ್ ಇಂಜಿನಿಯರಿಂಗ್ ಉಪನ್ಯಾಸಕರು – 11 + 01 (ಬ್ಯಾಕ್‌ಲಾಗ್) ಹುದ್ದೆಗಳು</td>
<td>ರೂ: 8,000 – 13500 (AICTE PAY SCALE)</td>
<td>Must be holder of a first class Bachelor's degree in Automobile Technology.</td>
<td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>01 (ಬ್ಯಾ.ಲಾ)</td><td>01</td><td>01</td><td>–</td><td>–</td><td>02+01</td></tr>
<tr><td>ಪ್ರ.1</td><td>–</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>–</td><td>01</td><td>–</td><td>–</td><td>01*</td><td>02</td></tr>
<tr><td>ಪ್ರ.2(ಬಿ)</td><td>–</td><td>01</td><td>–</td><td>–</td><td>–</td><td>01</td></tr>
<tr><td>ಸಾ.ಅ.</td><td>01</td><td>01</td><td>02</td><td>01</td><td>–</td><td>05</td></tr>
<tr><td>ಒಟ್ಟು</td><td>01+01</td><td>05</td><td>03</td><td>01</td><td>01</td><td>11+01</td></tr>
</table>
</td>
</tr>
<tr>
<td>315–324</td>
<td>08</td>
<td>ಕಮರ್ಷಿಯಲ್ ಪ್ರಾಕ್ಟೀಸ್ ಉಪನ್ಯಾಸಕರು – 10 ಹುದ್ದೆಗಳು</td>
<td>– ಅದೇ –</td>
<td>Must be holder of a first class Master's degree in Commerce.</td>
<td>– ಮೇಲಿನಂತೆ –</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಪ್ರ.1</td><td>–</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಸಾ.ಅ.</td><td>01</td><td>02</td><td>01</td><td>–</td><td>01</td><td>–</td><td>05</td></tr>
<tr><td>ಒಟ್ಟು</td><td>01</td><td>05</td><td>01</td><td>–</td><td>01</td><td>02</td><td>10</td></tr>
</table>
</td>
</tr>
<tr>
<td>325–373</td>
<td>09</td>
<td>ವಿಜ್ಞಾನ ಉಪನ್ಯಾಸಕರು – 48 + 01 (ಬ್ಯಾಕ್‌ಲಾಗ್) ಹುದ್ದೆಗಳು</td>
<td>– ಅದೇ –</td>
<td>Must be holder of a first class Master's degree in Physics with Mathematics as one of the subjects for the Bachelor's Degree or first class Master's degree in mathematics with physics as one of the subjects in the Bachelor's Degree.</td>
<td>– ಮೇಲಿನಂತೆ –</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>02</td><td>02</td><td>02+01 (ಬ್ಯಾ.ಲಾ)</td><td>01</td><td>–</td><td>–</td><td>07+01</td></tr>
<tr><td>ಪ.ಪಂ.</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.1</td><td>–</td><td>–</td><td>01</td><td>–</td><td>–</td><td>01*</td><td>02</td></tr>
<tr><td>ಪ್ರ.2(ಎ)</td><td>02</td><td>02</td><td>02</td><td>01</td><td>–</td><td>–</td><td>07</td></tr>
<tr><td>ಪ್ರ.2(ಬಿ)</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.3(ಎ)</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.3(ಬಿ)</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಸಾ.ಅ.</td><td>08</td><td>07</td><td>05</td><td>03</td><td>01</td><td>–</td><td>24</td></tr>
<tr><td>ಒಟ್ಟು</td><td>12</td><td>15</td><td>14+01</td><td>05</td><td>01</td><td>01</td><td>48+01</td></tr>
</table>
</td>
</tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td>374–452</td><td>10</td><td>ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು – 78 + 01 (ಬ್ಯಾಕ್‌ಲಾಗ್) ಹುದ್ದೆಗಳು</td><td>ರೂ: 8,000 – 13500 (AICTE PAY SCALE)</td><td>Must be holder of a first class degree in Computer Science & Engineering.</td><td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>04+01 (ಬ್ಯಾಲಾ)</td><td>03</td><td>03</td><td>01</td><td>01</td><td>–</td><td>12+01</td></tr>
<tr><td>ಪ.ಪಂ.</td><td>–</td><td>01</td><td>–</td><td>–</td><td>–</td><td>01*</td><td>02</td></tr>
<tr><td>ಪ್ರ.1</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.2(ಎ)</td><td>03</td><td>04</td><td>03</td><td>01</td><td>01</td><td>–</td><td>12</td></tr>
<tr><td>ಪ್ರ.2(ಬಿ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.3(ಎ)</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.3(ಬಿ)</td><td>01</td><td>01</td><td>01</td><td>–</td><td>–</td><td>01*</td><td>04</td></tr>
<tr><td>ಸಾ.ಅ.</td><td>11</td><td>11</td><td>10</td><td>04</td><td>02</td><td>01**</td><td>39</td></tr>
<tr><td>ಒಟ್ಟು</td><td>19+01</td><td>23</td><td>20</td><td>06</td><td>04</td><td>06</td><td>78+01</td></tr>
</table>
</td></tr>
<tr><td>453–468</td><td>11</td><td>ಆಂಗ್ಲಭಾಷೆ ಉಪನ್ಯಾಸಕರು – 16 ಹುದ್ದೆಗಳು</td><td>– ಅದೇ –</td><td>Must be holder of a first class Master's degree in English.</td><td>- ಮೇಲಿನಂತೆ –</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>–</td><td>01</td><td>01</td><td>–</td><td>–</td><td>01*</td><td>03</td></tr>
<tr><td>ಪ್ರ.2(ಎ)</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.2(ಬಿ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಸಾ.ಅ.</td><td>02</td><td>03</td><td>02</td><td>01</td><td>–</td><td>–</td><td>08</td></tr>
<tr><td>ಒಟ್ಟು</td><td>05</td><td>05</td><td>04</td><td>01</td><td>–</td><td>01</td><td>16</td></tr>
</table>
</td></tr>
<tr><td>469–470</td><td>12</td><td>ಇನ್‌ಫರ್‌ಮೇಶನ್ ಸೈನ್ಸ್ ಉಪನ್ಯಾಸಕರು – 02 ಹುದ್ದೆಗಳು</td><td>– ಅದೇ –</td><td>Must be holder of a first class degree in Information Technology.</td><td>- ಮೇಲಿನಂತೆ –</td><td>ಸಾಮಾನ್ಯ ಅರ್ಹತೆ (ಮಹಿಳೆ) – 01 ಹುದ್ದೆ<br>ಪ್ರವರ್ಗ–1(ಇತರೆ) – 01 ಹುದ್ದೆ</td></tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| 471–472 | 13 | ಸಿನಿಮಾಟೋಗ್ರಫಿ ಉಪನ್ಯಾಸಕರು 01 + 01 (ಬ್ಯಾಕ್‌ಲಾಗ್ ) ಹುದ್ದೆಗಳು | ರೂ: 8,000 – 13500 (AICTE PAY SCALE) | Must be holder of a first class degree in Cinematography. Provided that if candidates with first class Bachelor's degree in Cinematography are not available, candidates with any degree with minimum 55% marks from a recognised University with first class Diploma in Cinematography can be considered. Must be holder of a first class degree in Information Technology. | ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38 | ಸಾಮಾನ್ಯ ಅರ್ಹತೆ(ಇತರೆ) – 01 ಹುದ್ದೆ<br>ಪರಿಶಿಷ್ಟ ಜಾತಿ(ಇತರೆ)– 01 ಹುದ್ದೆ (ಬ್ಯಾಕ್‌ಲಾಗ್) |
| 473 | 14 | ಮೆಟಲರ್ಜಿ ಉಪನ್ಯಾಸಕರು 01 ಹುದ್ದೆ | – ಅದೇ – | Must be holder of a first class degree in Metalurgical Engineering. | – ಮೇಲಿನಂತೆ – | ಪರಿಶಿಷ್ಟ ಜಾತಿ (ಇತರೆ) –01((ಬ್ಯಾಕ್‌ಲಾಗ್) ಹುದ್ದೆ |
| 474–475 | 15 | ವೆಲ್ಡಿಂಗ್ ಅಂಡ್ ಶೀಟ್ ಮೆಟಲ್ ಉಪನ್ಯಾಸಕರು – 02 ಹುದ್ದೆಗಳು | – ಅದೇ – | Must be holder of a first class degree in Welding & Sheet Metal Technology. Provided that if candidates possessing the first class Degree are not available, candidates with first class B.E. in Mechanical Engineering with first Class Diploma in Welding & Sheet Metal Technology may be considered. | – ಮೇಲಿನಂತೆ – | ಸಾಮಾನ್ಯ ಅರ್ಹತೆ(ಇತರೆ) – 01 ಹುದ್ದೆ<br>ಪರಿಶಿಷ್ಟ ಪಂಗಡ(ಇತರೆ) – 01 ಹುದ್ದೆ |
| 476–478 | 16 | ಕಾಸ್ಟೂಂ ಡಿಸೈನ್ ಅಂಡ್ ಡ್ರೆಸ್ ಮೇಕಿಂಗ್ ಉಪನ್ಯಾಸಕರು – 03 ಹುದ್ದೆಗಳು | – ಅದೇ – | Must be holder of Master's degree in Clothing/Garment/ Fashion Technology. If no suitable candidates with Master's degree in Clothing/ Garment/ Fashion Technology are available, degree in Science/ Fashion Technology / Garment Technology with first class Diploma in C.D.D.M of recognised Institution or Board may be considered. | – ಮೇಲಿನಂತೆ – | ಸಾಮಾನ್ಯ ಅರ್ಹತೆ (ಆಂ.ವಿ) – 01* ಹುದ್ದೆ<br>ಪರಿಶಿಷ್ಟ ಜಾತಿ(ಮಹಿಳೆ) – 01 ಹುದ್ದೆ<br>ಪ್ರವರ್ಗ–2ಎ(ಇತರೆ) – 01 ಹುದ್ದೆ |

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td>479–490</td><td>17</td><td>ಮೆಷಿನ್ ಟೂಲ್ ಟೆಕ್ನಾಲಜಿ ಉಪನ್ಯಾಸಕರು –12 ಹುದ್ದೆಗಳು</td><td>ರೂ: 8,000 – 13500 (AICTE PAY SCALE)</td><td>Must be holder of a first class degree in Machine Tool Technology. Provided that if candidates possessing the first class Degree are not available, candidates with first class B.E. in Mechanical Engineering along with first Class Diploma in Machine Tool Technology may be considered.</td><td>ಕನಿಷ್ಠ – 18<br>ಗರಿಷ್ಠ – 33<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 36<br>ಪ.ಜಾ, ಪ.ಪಂ, ಪ್ರ 1 } 38</td><td><table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ.</td><td>01</td><td>01</td><td>–</td><td>–</td><td>02</td></tr>
<tr><td>ಪ.ಪಂ.</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.1</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td></td><td>–</td><td>–</td><td>01</td></tr>
<tr><td>ಪ್ರ.2(ಬಿ)</td><td>01</td><td></td><td>–</td><td>–</td><td>01</td></tr>
<tr><td>ಸಾ.ಅ.</td><td>01</td><td>02</td><td>02</td><td>01*</td><td>06</td></tr>
<tr><td>ಒಟ್ಟು</td><td>06</td><td>03</td><td>02</td><td>01</td><td>12</td></tr>
</table></td></tr>
<tr><td>491</td><td>18</td><td>ಕೆಮಿಕಲ್ ಇಂಜಿನಿಯರಿಂಗ್ ಉಪನ್ಯಾಸಕರು–01 ಹುದ್ದೆ</td><td>– ಅದೇ –</td><td>Must be holder of a first class degree in Chemical Engineering</td><td>– ಮೇಲಿನಂತೆ –</td><td>ಸಾಮಾನ್ಯ ಅರ್ಹತೆ(ಮಹಿಳೆ) – 01 ಹುದ್ದೆ</td></tr>
<tr><td>492</td><td>19</td><td>ಸಿರಾಮಿಕ್ ಇಂಜಿನಿಯರಿಂಗ್ ಉಪನ್ಯಾಸಕರು – 01 ಬ್ಯಾಕ್‌ಲಾಗ್ ಹುದ್ದೆ</td><td>– ಅದೇ –</td><td>Must be holder of a first class degree in Cement and Ceramic Engineering.</td><td>– ಮೇಲಿನಂತೆ –</td><td>ಪರಿಶಿಷ್ಟ ಪಂಗಡ (ಇತರೆ) – 01 ಹುದ್ದೆ</td></tr>
<tr><td>493</td><td>20</td><td>ಹೀಟ್ ಪವರ್ ಟೆಕ್ನಾಲಜಿ ಉಪನ್ಯಾಸಕರು – 01 ಹುದ್ದೆ</td><td>– ಅದೇ –</td><td>Must be holder of a first class degree in Heat Power Technology. Provided that if candidates possessing the first class Degree are not available, candidates with first class B.E. in Mechanical Engineering along with first Class Diploma in Heat Power Technology may be considered.</td><td>– ಮೇಲಿನಂತೆ –</td><td>ಸಾಮಾನ್ಯ ಅರ್ಹತೆ (ಇತರೆ) – 01 ಹುದ್ದೆ</td></tr>
</table>

